# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 302
ಸದಸ್ಯರ ಹೆಸರು : ಶ್ರೀ ಡಾ: ಚಂದ್ರಶೇಖರ್ ಬಿ.ಪಾಟೀಲ್(ಪದವಿಧರರ ಕ್ಷೇತ್ರ)
ಉತ್ತರಿಸುವ ದಿನಾಂಕ : 16-07-2019.
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಪ್ರೌಢಶಾಲೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಶಿಕ್ಷಕರಿಗೆ ಕಳೆದ 9 ವರ್ಷಗಳಿಂದ ಪದವಿ ಪೂರ್ವ ಕಾಲೇಜಿಗೆ ಬಡ್ತಿ ನೀಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಬಂದಿದೆ. |
| ಆ) | ಇದರಿಂದ ಶಿಕ್ಷಕರು ಬಡ್ತಿಯಿಂದ ವಂಚಿತರಾಗಿಯೇ ವಯೋನಿವೃತ್ತಿ ಹೊಂದುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಸರ್ಕಾರದ ಅಧಿಸೂಚನೆ ಸಂಖ್ಯೆ ಇಡಿ 35 ಡಿಜಿಒ 2009 ದಿನಾಂಕ : 15.05.2009ರಲ್ಲಿ ವೃಂದ ಮತ್ತು ನೇಮಕಾತಿ ನಿಯಮಕ್ಕೆ ಪರಿಷ್ಕರಣೆ ಮಾಡಿ ಶೇಕಡ 75 ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಹಾಗೂ ಶೇಕಡ 25ರಷ್ಟು ಪ್ರೌಢಶಾಲಾ ಸಹಶಿಕ್ಷಕರ ವೃಂದದಿಂದ ಸರ್ಕಾರಿ ಪದವಿ ಪೂರ್ವ ಕಾಲೇಜಿನ ಉಪನ್ಯಾಸಕರ ವೃಂದಕ್ಕೆ ಬಡ್ತಿ ಮೂಲಕ ತುಂಬಲು ಅವಕಾಶ ಕಲ್ಪಿಸಲಾಗಿದೆ. ಅದರಂತೆ ಆಯಾ ವೃಂದಗಳಿಗೆ ನಿಗದಿಯಾದ ಕೋಟಾದ ಹುದ್ದೆಗಳನ್ನು ಪರಿಷ್ಕರಿಸಬೇಕಾಗಿದೆ ಆದ್ದರಿಂದ ರಾಜ್ಯದ ಎಲ್ಲಾ ಸರ್ಕಾರಿ ಪದವಿ ಪೂರ್ವ ಕಾಲೇಜುಗಳಿಂದ ಸಮಗ್ರಮಾಹಿತಿಯನ್ನು ಪಡೆದು ನೇರ ನೇಮಕಾತಿ ಮತ್ತು ಬಡ್ತಿ ಹುದ್ದೆಗಳ ಮಾಹಿತಿಯನ್ನು ತಯಾರಿಸಲು ಕ್ರಮವಹಿಸಲಾಗಿದೆ<br>ಪದವಿಪೂರ್ವ ಶಿಕ್ಷಣ ಇಲಾಖೆಯಲ್ಲಿ 12857 ಉಪನ್ಯಾಸಕರ ಹುದ್ದೆಗಳು ಮಂಜೂರಾಗಿದ್ದು, ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಶೇಕಡ 25 ರಷ್ಟು ಅಂದರೆ 3214 ಹುದ್ದೆಗಳು ಬಡ್ತಿಗೆ ಮೀಸಲಾಗಿರುತ್ತವೆ. ಆದರೆ ಪ್ರಸ್ತುತ 3214 ಹುದ್ದೆಗಳ ಪೈಕಿ 3609 ಬಡ್ತಿ ಉಪನ್ಯಾಸಕರು ಕಾರ್ಯನಿರ್ವಹಿಸುತ್ತಿದ್ದಾರೆ. ಬಡ್ತಿ ಕೋಟಾದ ಹುದ್ದೆ ಖಾಲಿ ಇರುವುದಿಲ್ಲ. |
| ಇ) | ಯಾವ ಕಾರಣಕ್ಕಾಗಿ ಬಡ್ತಿಯನ್ನು ಸ್ಥಗಿತಗೊಳಿಸಲಾಗಿದೆ: ಅದನ್ನು ನಿವಾರಿಸಿ ಯಾವಾಗ ಬಡ್ತಿಯನ್ನು ನೀಡಲಾಗುವುದು? | |

**ಸಂಖ್ಯೆ: ಇಡಿ 126 ಡಿಜಿಡಬ್ಲ್ಯೂ 2019**

( ಎಸ್.ಆರ್.ಶ್ರೀನಿವಾಸ್ )
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು.